# ಮಕ್ಕಳ ಯೋಗಕ್ಷೇಮವನ್ನು ಕಾಪಾಡಲು ಶಿಕ್ಷಕರನ್ನು ಸಿದ್ಧಪಡಿಸುವುದು

ರಾಜಶ್ರೀ ಶ್ರೀನಿವಾಸನ್

ಪ್ರಸ್ತುತ ಸಮಾಜದಲ್ಲಿ ಪ್ರಚಲಿತದಲ್ಲಿರುವ ಶಿಕ್ಷಣ ಪದ್ಧತಿಯು ಮಕ್ಕಳ ಯೋಗಕ್ಷೇಮದ ಗುರಿಯೆಡೆಗೆ ಸಾಗುವ ಪ್ರಯತ್ನವಾಗಿದೆ. ಜಾನ್ ವೈಟ್ (2011) ತನ್ನ ಪುಸ್ತಕ 'ಎಕ್ಸ್‌ಪ್ಲೋರಿಂಗ್ ವೆಲ್‌ಬೀಯಿಂಗ್ ಇನ್ ಸ್ಕೂಲ್ಸ್'ನಲ್ಲಿ, ಪ್ರತಿ ಮಗುವನ್ನು ವೈಯಕ್ತಿಕವಾಗಿ ಪ್ರವರ್ಧಮಾನಕ್ಕೆ ತರಲು ಸಜ್ಜುಗೊಳಿಸುವುದು ಮತ್ತು ಇತರರಿಗೂ ಅದನ್ನು ಸಾಧಿಸಲು ಅನುವು ಮಾಡಿಕೊಡುವುದು ಶಾಲಾ ಶಿಕ್ಷಣದ ಶೈಕ್ಷಣಿಕ ಗುರಿ ಎಂಬುದಾಗಿ ಹೇಳುತ್ತಾರೆ. ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (National Curriculum Framework-NCF) 2005, '...ಭಾರತದ ಸಂವಿಧಾನದ ಮುನ್ನೋಟದಿಂದ ಮಾರ್ಗದರ್ಶನ ಪಡೆಯುತ್ತ... ಶಿಕ್ಷಣದ ಕೆಲವು ವಿಶಾಲ ಗುರಿಗಳನ್ನು ಈ ದಾಖಲೆಯಲ್ಲಿ ಗುರುತಿಸಲಾಗಿದೆ. ಇವು ಚಿಂತನೆ ಮತ್ತು ಕ್ರಿಯೆಯ ಸ್ವಾತಂತ್ರ್ಯ, ಇತರರ ಯೋಗಕ್ಷೇಮ ಮತ್ತು ಭಾವನೆಗಳಿಗೆ ಸ್ಪಂದನೆ, ಹೊಸ ಸನ್ನಿವೇಶಗಳನ್ನು ಒಪ್ಪಿಕೊಂಡು ಮತ್ತು ಅದಕ್ಕೆ ಮುಕ್ತ ಹಾಗೂ ಸೃಜನಶೀಲ ರೀತಿಯಲ್ಲಿ ಪ್ರತಿಕ್ರಿಯಿಸಲು ಕಲಿಯುವುದು, ಪ್ರಜಾಪ್ರಭುತ್ವ ಪ್ರಕ್ರಿಯೆಗಳಲ್ಲಿ ಭಾಗವಹಿಸುವ ಪ್ರವೃತ್ತಿ ಮತ್ತು ಆರ್ಥಿಕ ಪ್ರಕ್ರಿಯೆಗಳು ಮತ್ತು ಸಾಮಾಜಿಕ ಬದಲಾವಣೆಗಾಗಿ ದುಡಿಯುವ ಮತ್ತು ಕೊಡುಗೆ ನೀಡುವ ಸಾಮರ್ಥ್ಯ ಮೊದಲಾದ ಗುರಿಗಳು ಇದರಲ್ಲಿ ಒಳಗೊಂಡಿದೆ' (NCF ಡಾಕ್ಯುಮೆಂಟ್, ಪು..vii).

ಈ ವಿವರಣೆಗಳಲ್ಲಿ, ವ್ಯಕ್ತಿತ್ವವು ವೈಯಕ್ತಿಕ ಸಾಧನೆ ಅಥವಾ ಅನುಭವದ ಹೊರತಾಗಿದೆ ಮತ್ತು ಅದರ ರಚನೆಯನ್ನೂ ಮೀರಿ ಚಲಿಸುತ್ತದೆ. ಇದು ಉತ್ತಮ ಆರೋಗ್ಯ, ಮನೋಸಾಮಾಜಿಕ (psychosocial) ಸಾಮರ್ಥ್ಯಗಳು ಮತ್ತು ನೈತಿಕ ಸಂವೇದನೆಗಳ ಅಮೂರ್ತ ಸಂಯೋಜನೆಯಾಗಿದೆ. ವ್ಯಕ್ತಿತ್ವವು ಶಿಕ್ಷಣವನ್ನು ಯಾವ ಸಮಾಜದಲ್ಲಿ ಪಡೆಯಲಾಗುತ್ತಿದೆಯೋ ಆ ಸಮಾಜದ ಸಂದರ್ಭಗಳಲ್ಲಿ ಅದಕ್ಕನುಗುಣವಾಗಿ ನಿರ್ದಿಷ್ಟ ಅರ್ಥವನ್ನು ಪಡೆಯುತ್ತದೆ. ಮಕ್ಕಳ ವ್ಯಕ್ತಿತ್ವವು ಒಂದು ಪ್ರಕ್ರಿಯೆ ಮತ್ತು ಅನುಭವವಾಗಿ, ಕುಟುಂಬ, ಸಮಾನವಯಸ್ಕರು / ಗೆಳೆಯರು, ಶಾಲೆಗಳು ಮತ್ತು ಸಾಮಾಜಿಕ-ರಾಜಕೀಯ, ಆರ್ಥಿಕ, ಐತಿಹಾಸಿಕ, ಸಾಂಸ್ಕೃತಿಕ ಮತ್ತು ನೀತಿ ಸಂದರ್ಭಗಳಂತಹ ಸುತ್ತಮುತ್ತಲಿನ ಪರಿಸರದ ಅಂಶಗಳಿಂದ ಪ್ರಭಾವಿತವಾಗಿರುತ್ತದೆ ಮತ್ತು ಬದಲಾಗಿ ಅವುಗಳ ಮೇಲೆ ಪ್ರಭಾವವನ್ನೂ ಬೀರುತ್ತದೆ. ಶೈಕ್ಷಣಿಕ ವಾತಾವರಣದಲ್ಲಿ ವ್ಯಕ್ತಿತ್ವವು ಅಲ್ಲಿರುವ ಸಂಬಂಧಗಳ ಗಾಢತೆ ಮತ್ತು ಅಗತ್ಯಗಳಿಗೆ ತಕ್ಕಂತೆ ಪರಸ್ಪರರ ನಡುವೆ ನೀಡಲಾಗುವ ಪ್ರತಿಕ್ರಿಯೆಗಳು, ವಿದ್ಯಾರ್ಥಿಗಳ ಆಸಕ್ತಿಗಳು, ಸಾಮರ್ಥ್ಯಗಳು ಮತ್ತು ಸವಾಲುಗಳಿಗೆ ನೀಡಲಾಗುವ ಪ್ರತಿಕ್ರಿಯೆಗಳನ್ನು ಅವಲಂಬಿಸಿದೆ. ಇದು ಮಗುವಿನ ಹುಟ್ಟಿನಿಂದಲೇ ಬಂದ ಸಾಮರ್ಥ್ಯ ಅಥವಾ ವೈಯಕ್ತಿಕ ಗುಣಲಕ್ಷಣವಲ್ಲ. ಇದು ಬಾಲ್ಯ ಮತ್ತು ಹದಿಹರೆಯದ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಹೊರಹೊಮ್ಮುತ್ತದೆ ಮತ್ತು ಅವರ ಭವಿಷ್ಯದ ಮೇಲೆ ಪ್ರಭಾವ ಬೀರುತ್ತದೆ. ಅಂದರೆ, ತಮ್ಮ ವ್ಯಕ್ತಿತ್ವದ ಬಗ್ಗೆ ಮಕ್ಕಳ ಗ್ರಹಿಕೆಗಳು ಸುತ್ತಮುತ್ತಲಿನ ಸ್ಥಳ ಹಾಗೂ ಪರಿಸರದೊಂದಿಗಿನ ಅವರ ಸಾಹಚರ್ಯದೊಂದಿಗೆ ರೂಪುಗೊಂಡು ಕಾಲಾನುಕ್ರಮದಲ್ಲಿ ಹೊರಹೊಮ್ಮುತ್ತವೆ. ಆದ್ದರಿಂದ, ಬಾಲ್ಯದಲ್ಲಿ ಅವರ ಸಾಮಾಜಿಕ ಹಿನ್ನೆಲೆಯಿಂದಾಗಿ ಅನುಭವಿಸುವ ಪೂರಕ ಸಂಬಂಧಗಳು ಅವರ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಪ್ರಮುಖವಾಗಿದೆ.

## ಶಾಲಾ ಶಿಕ್ಷಣ, ಬೋಧನೆ ಮತ್ತು ಯೋಗಕ್ಷೇಮ

ಶಾಲಾ ಶಿಕ್ಷಣವು ವಿದ್ಯಾರ್ಥಿಗಳಲ್ಲಿ ವ್ಯಕ್ತಿತ್ವ ವಿಕಸನಕ್ಕಾಗಿ ಅನೇಕ ಕ್ಷೇತ್ರಗಳಲ್ಲಿ ಅವರ ಸಾಮರ್ಥ್ಯವನ್ನು ವಿಸ್ತರಿಸಲು ಅಗತ್ಯವಾದ ವಾತಾವರಣವನ್ನು ಒದಗಿಸುತ್ತದೆ. ಅದು ತಿಳುವಳಿಕೆ ಮತ್ತು ತಾರ್ಕಿಕತೆ, ಶೈಕ್ಷಣಿಕ ಜ್ಞಾನ, ಸಾಮಾಜಿಕ-ಭಾವನಾತ್ಮಕ ವಿಷಯಗಳು, ನೈತಿಕತೆಯನ್ನು ಬೆಳೆಸಿಕೊಳ್ಳುವುದು (ಇತರರೊಂದಿಗೆ ತೊಡಗಿಸಿಕೊಳ್ಳುವ ಮತ್ತು ಉಪಯುಕ್ತವಾದ ಸಂಬಂಧಗಳು ಮತ್ತು ಚಟುವಟಿಕೆಗಳನ್ನು ರೂಪಿಸುವುದು ಸೇರಿದಂತೆ) ಮತ್ತು ಪ್ರಜಾಪ್ರಭುತ್ವದ ಪೌರತ್ವದ ಪ್ರಕ್ರಿಯೆಗಳಲ್ಲಿ ಭಾಗವಹಿಸುವ ಸಾಮರ್ಥ್ಯಗಳನ್ನು ಒಳಗೊಂಡಿದೆ. ಆದ್ದರಿಂದ ಶಾಲೆಗಳು ಸಹಾನುಭೂತಿ, ಘನತೆ, ಗೌರವ, ಸ್ವಾತಂತ್ರ್ಯ ಮತ್ತು ಸ್ವಯಂ ಅಭಿವ್ಯಕ್ತಿಗೆ ಹೇರಳವಾದ ಅವಕಾಶಗಳನ್ನು ಹೊಂದಿದ ಕಲಿಕೆಯ ವಾತಾವರಣವನ್ನು ಖಾತ್ರಿಪಡಿಸುವ ಕಾರ್ಯವನ್ನು ನಿರ್ವಹಿಸುತ್ತವೆ. ವ್ಯಕ್ತಿತ್ವ ರೂಪಿಸುವಲ್ಲಿ ಸಂದರ್ಭೋಚಿತ ತಿಳುವಳಿಕೆಯನ್ನು ಗುರಿಯಾಗಿಟ್ಟುಕೊಂಡ ಶಿಕ್ಷಣದ ಬುನಾದಿ ನ್ಯಾಯ ಮತ್ತು ಕಾಳಜಿಯ ಪರಿಕಲ್ಪನೆಗಳಾಗಿವೆ. ನ್ಯಾಯ ಮತ್ತು ಕಾಳಜಿಯು ಒಳಗೊಳ್ಳುವಿಕೆಯ ಶಾಲಾ ಶಿಕ್ಷಣದ ಅತ್ಯಗತ್ಯ ಅಂಶಗಳಾಗಿವೆ ಮತ್ತು ಬೋಧನೆಯು ಒಂದು 'ಸಂವಾದಾತ್ಮಕ ಅಭ್ಯಾಸ' (relational practice) ಎಂಬ ಕಲ್ಪನೆಗೆ ಅಡಿಪಾಯವಾಗಿದೆ.

ತರಗತಿಯಲ್ಲಿರುವ ಎಲ್ಲ ಮಕ್ಕಳು ಸಂಪನ್ಮೂಲಗಳನ್ನು ಬಳಸುವಲ್ಲಿ ನಿಷ್ಪಕ್ಷಪಾತ, ನ್ಯಾಯೋಚಿತ, ಸಮಾನ ಹಕ್ಕುಗಳು ಮತ್ತು ಅವಕಾಶಗಳನ್ನು ಹೊಂದಿದ್ದಾರೆ ಎಂಬ ಊಹೆಯ ಆಧಾರದ ಮೇಲೆ ಸಾಮಾಜಿಕ ನ್ಯಾಯದ ಪ್ರಮುಖ ಪಾಠಗಳನ್ನು ಪರಿಚಯಿಸಲಾಗಿದೆ. ಸಾಮಾಜಿಕ ನ್ಯಾಯದ ಪಾಠಗಳು ವಿದ್ಯಾರ್ಥಿಗಳು ತಮ್ಮ ಸ್ವಂತ ವ್ಯಕ್ತಿತ್ವ ರೂಪಿಸಿಕೊಳ್ಳುವುದು, ಪೂರ್ವಾಗ್ರಹವನ್ನು ಹೋಗಲಾಡಿಸುವುದು ಮತ್ತು ವಿಭಿನ್ನ ಹಿನ್ನೆಲೆಯ ವ್ಯಕ್ತಿಗಳನ್ನು ಗೌರವಿಸಲು ಸಹಾಯ ಮಾಡುವುದ-ರೊಂದಿಗೆ, ತರಗತಿಗೆ ಮಾನವೀಯತೆಯ ಸ್ಪರ್ಶ ನೀಡಲು ಉದ್ದೇಶಿಸಿದೆ. ಸಾಮಾಜಿಕ ನ್ಯಾಯ-ಆಧಾರಿತ ವಿಧಾನಗಳು ಮಕ್ಕಳ ನಡುವಿನ ಕೊರತೆಗಳ ಬದಲಾಗೆ ವ್ಯತ್ಯಾಸಗಳ ಮೇಲೆ ಕೇಂದ್ರೀಕರಿಸುತ್ತವೆ; ಸಾಂಸ್ಕೃತಿಕವಾಗಿ ಇಂದಿಗೂ ಅನ್ವಯವಾಗುವ ಪುರಾತನ ಜ್ಞಾನದ ಮೇಲೆ ಈ ವಿಧಾನಗಳನ್ನು ರೂಪಿಸಲಾಗಿದೆ. ಪರಸ್ಪರ ನಂಬಿಕೆ ಮತ್ತು ಸಹಾನುಭೂತಿಯನ್ನು ಒಳಗೊಂಡ ತರಗತಿಯ ಸಂಸ್ಕೃತಿಯನ್ನು ರಚಿಸಿ; ಅನ್ಯಾಯ ನಡೆಯುತ್ತಿರುವಲ್ಲಿ ಅದನ್ನು ಪ್ರಶ್ನಿಸಲು ವಿದ್ಯಾರ್ಥಿಗಳಿಗೆ ಸಹಾಯ ಮಾಡಿ; ತಮ್ಮ ಸಮುದಾಯಗಳೆಡೆಗೆ ಮತ್ತು ನಾಗರಿಕ ಕರ್ತವ್ಯಗಳ ಕಡೆಗೆ ಮಕ್ಕಳ ಬದ್ಧತೆಯನ್ನು ಪೋಷಿಸಬೇಕಾಗಿದೆ.

ಉತ್ತಮ ಬೋಧನೆಯು ಕಾಳಜಿಯನ್ನು ಕೇಂದ್ರವಾಗಿರಿಸಿ-ಕೊಳ್ಳಬೇಕು. ಇದು ತೋರಿಕೆಯ ಕಾಳಜಿಯಲ್ಲ. ಇದು ಇತರರ ಯೋಗಕ್ಷೇಮಕ್ಕಾಗಿ/ಒಳಿತಿಗಾಗಿ ಸಕ್ರಿಯ ಕಾಳಜಿಯನ್ನು ತೋರಿಸುವ ಸಂಬಂಧದ ಮೌಲ್ಯವನ್ನು ಸೂಚಿಸುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ಇದು ಮಗು ಮತ್ತು ಶಿಕ್ಷಕರ ನಡುವಿನ ಪರಸ್ಪರ ಸಂಬಂಧಗಳ ರೂಪುಗೊಳ್ಳುವಿಕೆಗೆ ಸಹಕಾರಿಯಾಗಿದೆ. ಇದು ಸಂಬಂಧಗಳನ್ನು ಉಳಿಸಿಕೊಳ್ಳುವ ಸಾಮರ್ಥ್ಯ ಮತ್ತು ಸೂಕ್ಷ್ಮವಾಗಿ ಹಾಗೂ ಆಪ್ತವಾಗಿ ಮಕ್ಕಳಿಗೆ ಪ್ರತಿಕ್ರಿಯಿಸುವ ಬದ್ಧತೆಯನ್ನು ಒಳಗೊಂಡಿದೆ. ಕಾಳಜಿಯ ಅಭ್ಯಾಸಗಳು ಶಿಕ್ಷಕರು ಮತ್ತು ಮಕ್ಕಳು ತೊಡಗಿಸಿಕೊಳ್ಳುವ ವಿವಿಧ ಸಂವಹನಗಳಲ್ಲಿ ಗೋಚರಿಸುತ್ತವೆ. ಅವುಗಳೆಂದರೆ: ಮಕ್ಕಳ ವಯಸ್ಸಿಗನು-ಗುಣವಾಗಿ ಸೂಕ್ತವಾದ ಪಾಠಗಳನ್ನು ಯೋಜಿಸುವುದು, ತರಗತಿಯ ಪ್ರಕ್ರಿಯೆಗಳಲ್ಲಿ ವಿದ್ಯಾರ್ಥಿಗಳನ್ನು ತೊಡಗಿಸಿ-ಕೊಳ್ಳುವುದು, ಅಭಿವ್ಯಕ್ತಿಗೆ ಸುರಕ್ಷಿತ ಅವಕಾಶಗಳನ್ನು ಒದಗಿಸುವುದು, ವಿದ್ಯಾರ್ಥಿಗಳಿಗೆ ಮೆಚ್ಚುಗೆ ಸೂಚಿಸುವುದು, ನಿರ್ಧಾರ ತೆಗೆದುಕೊಳ್ಳುವಲ್ಲಿ ಮಕ್ಕಳ ದೃಷ್ಟಿಕೋನಗಳನ್ನು ಒಳಗೊಳ್ಳುವುದು, ತರಗತಿಯ ಸಂವಾದಗಳು ಅಥವಾ ಇತರೆ ಸಂವಾದಗಳಿಗೆ ಗಡಿಗಳನ್ನು ಗುರುತಿಸುವುದು, ತರಗತಿಯ ನೀತಿ ನಿಯಮಗಳನ್ನು ವಿದ್ಯಾರ್ಥಿ-ಶಿಕ್ಷಕರಿಬ್ಬರೂ ಒಟ್ಟಿಗೆ ರೂಪಿಸುವುದು, ಮಕ್ಕಳ ಮಾನಸಿಕ ಆರೋಗ್ಯದ ಅಗತ್ಯಗಳನ್ನು ಆಲಿಸುವುದು, ಅವರ ಕಷ್ಟದ ಸಂದರ್ಭಗಳಲ್ಲಿ ಅವರಿಗೆ ಜೊತೆಯಾಗಿರುವುದು, ಅವರನ್ನು ಆಳವಾದ ಯೋಚನೆಗೆ / ತರ್ಕಕ್ಕೆ ಒಡ್ಡಬಲ್ಲ ಸವಾಲುಗಳನ್ನು ಒಡ್ಡುವುದು, ಅವರ ವಿನಂತಿಗಳನ್ನು ನಿರಾಕರಿಸುವುದು, ಅವರ ಕಾರ್ಯಗಳಿಗೆ ರಚನಾತ್ಮಕ ಪ್ರತಿಕ್ರಿಯೆಯನ್ನು ನೀಡುವುದು ಇತ್ಯಾದಿಗಳಲ್ಲಿ ವ್ಯಕ್ತವಾಗುತ್ತವೆ. ಶಿಕ್ಷಕರ ಪಾತ್ರದ ಕುರಿತ ಈ ಮೇಲಿನ ವಿವರಣೆಯ ಅರ್ಥ ಮಕ್ಕಳ ಯೋಗಕ್ಷೇಮವನ್ನು ಖಾತ್ರಿಪಡಿಸುವುದು ಶಿಕ್ಷಕರದ್ದಷ್ಟೇ ಜವಾಬ್ದಾರಿ ಎಂದಲ್ಲ. ಶಾಲೆಯು ಸಂಬಂಧಗಳ ಜಾಲವಾಗಿದೆ ಮತ್ತು ಶಿಕ್ಷಕರು ಮಕ್ಕಳೆಡೆಗೆ ವ್ಯಕ್ತಪಡಿಸುವ ಕಾಳಜಿಯು ಅನೇಕ ಹಂತಗಳಲ್ಲಿ ಎಂದರೆ ಅಂತರ್-ವೈಯಕ್ತಿಕ, ಪರಸ್ಪರ ಮತ್ತು ಸಾಂಸ್ಥಿಕ ಹಂತಗಳಲ್ಲಿ ವ್ಯಕ್ತವಾಗುತ್ತದೆ. ಆದ್ದರಿಂದ, ಯೋಗಕ್ಷೇಮವು ಶಾಲೆಗೆ ಸಂಬಂಧಿಸಿದ ಎಲ್ಲರೂ ಎಂದರೆ ಮುಖ್ಯ ಶಿಕ್ಷಕರು, ಶಿಕ್ಷಕರು, ಬೋಧಕೇತರ ಸಿಬ್ಬಂದಿ ಮತ್ತು ಪೋಷಕರು ಗಮನಹರಿಸಬೇಕಾದ ಪ್ರಮುಖ ಶೈಕ್ಷಣಿಕ ಕಾಳಜಿಯಾಗಿದೆ. ಮಕ್ಕಳ ಜೀವನದಲ್ಲಿ ಅವರ ಯೋಗಕ್ಷೇಮಕ್ಕೆ ಪ್ರಾಮುಖ್ಯತೆಯನ್ನು ನೀಡಲಾಗಿದೆ, ಶಿಕ್ಷಕರ ಪೂರ್ವ ತಯಾರಿ ಕಾರ್ಯ-ಕ್ರಮಗಳಲ್ಲಿಯೂ ಈ ಅಂಶಗಳಿಗೆ ಗಮನ ಕೊಡುವುದು ಮುಖ್ಯವಾಗಿದೆ.

## ಮಕ್ಕಳ ಯೋಗಕ್ಷೇಮ ಮತ್ತು ಶಿಕ್ಷಕರ ಶಿಕ್ಷಣದ ಬೋಧನಾ ವಿಧಾನ

ಸೇವಾ ಪೂರ್ವ ಶಿಕ್ಷಕರ ಶಿಕ್ಷಣ ಕಾರ್ಯಕ್ರಮಗಳು (Pre-service teacher education programmes) ಭವಿಷ್ಯದ ಶಿಕ್ಷಕರಲ್ಲಿ ಜ್ಞಾನ, ಕೌಶಲ್ಯ ಮತ್ತು ಮೌಲ್ಯಗಳ ವಿಷಯದಲ್ಲಿ ಅವರ ಸಾಮರ್ಥ್ಯಗಳನ್ನು ಅಭಿವೃದ್ಧಿಪಡಿಸಲು ಅವರನ್ನು ಸಂಪರ್ಕಿಸುವ ಮೊದಲ ಹಂತವಾಗಿದೆ. ಶಿಕ್ಷಕರ ಶಿಕ್ಷಣಕ್ಕಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (NCFTE, 2009) ಶಿಕ್ಷಕರ ಪೂರ್ವ-ಸಿದ್ಧತೆಯ ಕುರಿತಾದ ದೃಷ್ಟಿಕೋನವನ್ನು ಹೀಗೆ ಹೇಳುತ್ತದೆ. 'ಶಿಕ್ಷಕರು ಮಕ್ಕಳ ಬಗ್ಗೆ ಕಾಳಜಿ ವಹಿಸಲು ಸಿದ್ಧವಾಗುವುದು, ಅವರೊಂದಿಗೆ ಇರುವುದನ್ನು ಆನಂದಿಸಲು, ಜ್ಞಾನವನ್ನು ಪಡೆಯಲು, ಸಮಾಜದ ಬಗ್ಗೆ ಸ್ವತಃ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಮತ್ತು ಉತ್ತಮವಾದ ಸಮಾಜ ನಿರ್ಮಾಣಕ್ಕಾಗಿ ಕೆಲಸ ಮಾಡಲು ಸಿದ್ಧವಾಗುವುದು, ಕಲಿಯುವವರ ಸಮಸ್ಯೆಗಳಿಗೆ ಸಂವೇದನಾಶೀಲತೆ, ನ್ಯಾಯಕ್ಕೆ ಬದ್ಧತೆ ಮತ್ತು ಸಮಾಜದ ಪುನರ್‌ನಿರ್ಮಾಣಕ್ಕಾಗಿ ಉತ್ಸಾಹವನ್ನು ಬೆಳೆಸಿಕೊಳ್ಳುವುದು' (NCFTE, p 20).

## ವಿದ್ಯಾರ್ಥಿ-ಶಿಕ್ಷಕರ ಪಾತ್ರ

ವಿದ್ಯಾರ್ಥಿ-ಶಿಕ್ಷಕರು ತಮ್ಮ ತರಗತಿಗಳಲ್ಲಿ ಅಭಿವೃದ್ಧಿಯ ಅಗತ್ಯತೆಗಳು ಮತ್ತು ವೈವಿಧ್ಯತೆಗೆ ಪ್ರತಿಕ್ರಿಯಿಸಲು ಸಿದ್ಧರಾಗಿರಬೇಕು. ಮಕ್ಕಳ ಯೋಗಕ್ಷೇಮಕ್ಕೆ ಸವಾಲುಗಳು ತರಗತಿಯ ಒಳಗೆ ಅಥವಾ ಹೊರಗಿನ ಅಂಶಗಳಿಂದ ಬರಬಹುದು. ಮಕ್ಕಳು, ಅದರಲ್ಲೂ ವಿಶೇಷವಾಗಿ ಕಷ್ಟಕರವಾದ

ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆಯಿಂದ ಬಂದವರು, ಸಂಘರ್ಷಗಳು, ದೈಹಿಕ ಶಿಕ್ಷೆ, ಹಿಂಸೆ, ಕಳಂಕ ಮತ್ತು ತಾರತಮ್ಯವನ್ನು ವ್ಯಾಪಕವಾಗಿ ಅನುಭವಿಸಬಹುದು. ಈ ಘಟನೆಗಳು ತರಗತಿಯಲ್ಲಿ ಅವರ ಶೈಕ್ಷಣಿಕ ಫಲಿತಾಂಶಗಳ ಮೇಲೆ ಪರಿಣಾಮ ಬೀರುತ್ತವೆ ಮತ್ತು ಅವರ ಭಾವನಾತ್ಮಕ ಯೋಗಕ್ಷೇಮವನ್ನು ತಡೆಯುತ್ತದೆ. ವಿದ್ಯಾರ್ಥಿ–ಶಿಕ್ಷಕರು ಈ ಸಂದರ್ಭಗಳಿಗೆ ಸೂಕ್ಷ್ಮತೆ ಮತ್ತು ನಮ್ಯತೆಯೊಂದಿಗೆ ಪ್ರತಿಕ್ರಿಯಿಸುವ ಅಗತ್ಯವಿದೆ. ವಿದ್ಯಾರ್ಥಿ–ಶಿಕ್ಷಕರು ತಮ್ಮ ತರಗತಿಗಳಲ್ಲಿ ಸಕ್ರಿಯವಾಗಿರಲು ಅಗತ್ಯವಿರುವ ಪೂರಕ ವಾತಾವರಣವನ್ನು ನಿರ್ಮಿಸಲು ಶಿಕ್ಷಕರ ಶಿಕ್ಷಣ ಕಾರ್ಯಕ್ರಮಗಳನ್ನು (Teacher education programmes) ಈ ರೀತಿಯಾಗಿ ಸಿದ್ಧಪಡಿಸಬಹುದು –: ಎ) ತಮ್ಮ ತರಗತಿಗಳಲ್ಲಿ ಕಾಳಜಿಯ ಪಾಠಗಳನ್ನು ಜಾರಿಗೆ ತರಲು ಅಗತ್ಯವಿರುವ ಜ್ಞಾನ, ಕೌಶಲ್ಯ ಮತ್ತು ಮೌಲ್ಯಗಳು ಇರುವಂತೆ ನೋಡಿಕೊಳ್ಳುವುದು; ಬಿ) ನಿರ್ದಿಷ್ಟ ಬೋಧನಾ ವಿಧಾನಗಳೊಂದಿಗೆ ಅವುಗಳನ್ನು ಸಿದ್ಧಪಡಿಸುವುದು, ಇದರಿಂದ ಅವರು ತರಗತಿ ಮತ್ತು ಶಾಲೆಯಲ್ಲಿ ಕಾಳಜಿಯುಳ್ಳ ಸಮುದಾಯಗಳನ್ನು ರಚಿಸಬಹುದು; ಸಿ) ಮಕ್ಕಳ ಸಾಮಾಜಿಕ–ಭಾವನಾತ್ಮಕ ಅಗತ್ಯಗಳಿಗೆ ಸೂಕ್ಷ್ಮತೆಯನ್ನು ಬೆಳೆಸುವುದು. ಈ ಗುರಿಗಳನ್ನು ಸಾಧಿಸಲು ಕೆಲವು ಬೋಧನಾ ವಿಧಾನಗಳನ್ನು ಕೆಳಗೆ ವಿವರಿಸಲಾಗಿದೆ. ಈ ವಿಧಾನಗಳಿಗೆ ಶಿಕ್ಷಕರ ಶಿಕ್ಷಣದ ಪಠ್ಯಕ್ರಮದಲ್ಲಿ ಪ್ರತ್ಯೇಕ ಸಮಯ ಅಥವಾ ಸ್ಥಳಾವಕಾಶದ ಅಗತ್ಯವಿರುವುದಿಲ್ಲ. ಶಿಕ್ಷಕರಿಗೆ ತರಬೇತಿ ನೀಡುವ ಬೋಧಕರು ತಮ್ಮ ಪಠ್ಯ ಅಥವಾ ಪ್ರಾಯೋಗಿಕ ತರಗತಿಗಳ ಬೋಧನೆಯಲ್ಲಿ ಅವುಗಳನ್ನು ಸಂಯೋಜಿಸಬಹುದು.

## ಯೋಗಕ್ಷೇಮವನ್ನು ಉತ್ತೇಜಿಸುವ ಅಂಶಗಳು

ಕೆಳಗೆ ವಿವರಿಸಿದ ವಿಧಾನಗಳು ಮೂರು ಘಟಕಗಳನ್ನು ಒಳಗೊಂಡಿವೆ ಮೊದಲನೆಯದಾಗಿ, ಶಿಕ್ಷಕರು ಸಿದ್ಧಪಡಿಸಬೇಕಾದ ಕೌಶಲ ಕ್ಷೇತ್ರ; ಎರಡನೆಯದಾಗಿ, ಈ ಕೌಶಲ ಕ್ಷೇತ್ರವನ್ನು ಸೇರಿಸುವ ತರ್ಕಬದ್ಧತೆ ಮತ್ತು ಮೂರನೆಯದು, ಸಂಭವನೀಯ ಪಠ್ಯಕ್ರಮ ಮತ್ತು ಶಿಕ್ಷಣ ವಿಧಾನ.

## ತಾರತಮ್ಯ ಮತ್ತು ಪೂರ್ವಾಗ್ರಹವನ್ನು ನಿಭಾಯಿಸುವುದು

ಸರ್ಕಾರಿ ಶಾಲೆಗಳಲ್ಲಿನ ಮಕ್ಕಳು ಸಾಮಾಜಿಕ ವರ್ಗ, ಲಿಂಗ, ಧರ್ಮ, ಜಾತಿ, ಭಾಷೆ, ಅಂಗವೈಕಲ್ಯ ಮತ್ತು ಲೈಂಗಿಕ ದೃಷ್ಟಿಕೋನದ ವ್ಯತ್ಯಾಸಗಳಿಂದ ಉಂಟಾಗುವ ತಾರತಮ್ಯವನ್ನು ಅನುಭವಿಸಬಹುದು. ತಾರತಮ್ಯವು ಮಾನವ ಹಕ್ಕುಗಳ ಉಲ್ಲಂಘನೆಯಾಗಿದೆ ಮತ್ತು ಸಾಮಾಜಿಕ ಒಗ್ಗಟ್ಟು, ಶೈಕ್ಷಣಿಕ ಯಶಸ್ಸು ಮತ್ತು ಮಕ್ಕಳ ಯೋಗಕ್ಷೇಮವನ್ನು ಹಾಳುಮಾಡುತ್ತದೆ. ತರಗತಿಯಲ್ಲಿನ ನೇರ ಮತ್ತು ಪರೋಕ್ಷ ತಾರತಮ್ಯದ ಸಂಭವನೀಯ ಸ್ವರೂಪಗಳು ಹಾಗು ತಾರತಮ್ಯದ ವಿವಿಧ ಮೂಲಗಳು ಎಂದರೆ ತಮ್ಮದೇ ವರ್ತನೆಗಳು, ಶಾಲಾ ನಿಯಮಗಳು, ಪಠ್ಯಕ್ರಮ, ಬೋಧನಾ ಪಠ್ಯಗಳು, ಬೋಧನೆ–ಕಲಿಕೆ ಸಾಮಗ್ರಿಗಳು, ಆಹಾರದ ಲಭ್ಯತೆ ಮತ್ತು ಇತರ ಮೂಲಸೌಕರ್ಯಗಳ ಲಭ್ಯತೆಯಲ್ಲಿ ತಾರತಮ್ಯ ಇವುಗಳ ಬಗ್ಗೆ ಶಿಕ್ಷಕರು ತಿಳಿದಿರಬೇಕು.

ಶಿಕ್ಷಕರ ಶಿಕ್ಷಣ ಕಾರ್ಯಕ್ರಮಗಳು ವಿದ್ಯಾರ್ಥಿ – ಶಿಕ್ಷಕರಿಗೆ ವಿದ್ಯಾರ್ಥಿಗಳ ಬಾಲ್ಯಕ್ಕೆ ಸಂಬಂಧಿಸಿದ ಸಮಸ್ಯೆಗಳು, ಸಾಮಾಜಿಕ–ಸಾಂಸ್ಕೃತಿಕ ಹಿನ್ನೆಲೆ, ಕಲಿಕೆ, ಬೋಧನೆ ಮತ್ತು ವೈವಿಧ್ಯತೆಯನ್ನು ಕುರಿತಂತೆ ಇರುವ ಊಹೆಗಳು, ನಂಬಿಕೆಗಳು ಮತ್ತು ಸಿದ್ಧಮಾದರಿಯ ಕಲ್ಪನೆಗಳು ಇತ್ಯಾದಿಗಳನ್ನು ಪರೀಕ್ಷಿಸಿಕೊಳ್ಳಲು ಸಹಾಯ ಮಾಡುವ ನಿಟ್ಟಿನಲ್ಲಿ ರೂಪಿತವಾಗಬೇಕು. ಶಿಕ್ಷಕರು ಜಾತಿ, ವರ್ಗ, ಧರ್ಮ, ಲಿಂಗ ಮತ್ತು ಸಾಮರ್ಥ್ಯ ಹೀಗೆ ಅವರಿಗಿರುವ ಗುರುತುಗಳ ಮೂಲಕ ಅವರ 'ಸ್ವ ವ್ಯಕ್ತಿತ್ವ', ಸಂದರ್ಭಗಳು ಮತ್ತು ಸಂಬಂಧಗಳನ್ನು ವಿಮರ್ಶಿಸಬೇಕು. ಇದು ವಿದ್ಯಾರ್ಥಿಗಳ ವೈವಿಧ್ಯತೆ ಮತ್ತು ಯೋಗಕ್ಷೇಮದ ಕುರಿತು ಅವರಿಗೆ ಸೂಕ್ಷ್ಮತೆ ಮತ್ತು ಸಂವೇದನೆಗಳನ್ನು ಬೆಳೆಸಿಕೊಳ್ಳಲು ಸಹಾಯ ಮಾಡುತ್ತದೆ. ಇದರೊಂದಿಗೆ ಸೇವಾ ಪೂರ್ವ ಶಿಕ್ಷಕರ ತರಗತಿಯ ಚರ್ಚೆಗಳು ಯಾರು ತಾರತಮ್ಯಕ್ಕೆ ಒಳಗಾಗುವ ಅಪಾಯವನ್ನು ಹೊಂದಿರಬಹುದು, ತಾರತಮ್ಯವನ್ನು ಕಡಿಮೆ ಮಾಡುವ ವಿಧಾನಗಳು, ತಾರತಮ್ಯದ ಅಪಾಯದಲ್ಲಿರುವ ಮಕ್ಕಳನ್ನು ಬೆಂಬಲಿಸಲು ಮಾರ್ಗಗಳು, ಒಳಗೊಳ್ಳುವಿಕೆಯನ್ನು ಉತ್ತೇಜಿಸುವುದು ಮತ್ತು ಶಾಲೆಗಳಲ್ಲಿ ಅಥವಾ ತರಗತಿಯಲ್ಲಿ ಮೆಚ್ಚುಗೆ ಸೂಚಿಸುವುದು ಇತ್ಯಾದಿಗಳನ್ನು ಒಳಗೊಳ್ಳಬಹುದು.

## ಹಿಂಸೆಯನ್ನು ತಡೆಯುವುದು

ಶಾಲೆಗಳು ಯೋಗಕ್ಷೇಮ, ಶಾಂತಿ ಮತ್ತು ಒಳಗೊಳ್ಳುವಿಕೆಯ ತಾಣಗಳಾಗಬೇಕು. ಮಕ್ಕಳನ್ನು ಹಿಂಸೆಯಿಂದ ರಕ್ಷಿಸುವ ಜವಾಬ್ದಾರಿ ಅವರ ಮೇಲಿದೆ. ಆದಾಗ್ಯೂ, ವಿವಿಧ ರೀತಿಯ ನೇರ ಹಿಂಸಾಚಾರಗಳನ್ನು ಶಿಕ್ಷಕರಿಂದ ಮತ್ತು ಇತರ ಮಕ್ಕಳಿಂದ ಹೊಡೆಯುವುದು ಮತ್ತು ಬೆದರಿಸುವಿಕೆಯ (cyberbullying – ಅಂತರ್ಜಾಲ ಬಳಸಿ ಮಕ್ಕಳಿಗೆ ಬೆದರಿಕೆ ಸೇರಿದಂತೆ) ರೂಪದಲ್ಲಿ ಮಕ್ಕಳು ಎದುರಿಸಬೇಕಾಗುತ್ತದೆ. ತರಗತಿಗಳಲ್ಲಿನ ಭಯ, ದೈಹಿಕ ಶಿಕ್ಷೆ ಮತ್ತು ಸ್ಪರ್ಧೆಯು ಮಕ್ಕಳಲ್ಲಿ ಆತಂಕವನ್ನು ಉಂಟುಮಾಡುತ್ತದೆ. ಮಕ್ಕಳೊಂದಿಗೆ ಸಂವಾದ ನಡೆಸುವಾಗ ಅವರಿಗೆ ಸುರಕ್ಷಿತ ಮತ್ತು ಧೈರ್ಯವಾಗಿ ಸಂಭಾಷಿಸುವ ಅವಕಾಶಗಳನ್ನು ಸೃಷ್ಟಿಸುವ ನಿಟ್ಟಿನಲ್ಲಿ ಪ್ರಜಾಸತ್ತಾತ್ಮಕ ಮತ್ತು ರಚನಾತ್ಮಕ ವಿಧಾನಗಳನ್ನು ಅಭಿವೃದ್ಧಿಪಡಿಸಲು ಭವಿಷ್ಯದ ಶಿಕ್ಷಕರಿಗೆ (Prospective teachers) ಶಿಕ್ಷಣ ನೀಡಬೇಕು. ತರಗತಿಯ ಶಿಸ್ತು ಕಾಪಾಡಲು ಮತ್ತು ಮಕ್ಕಳೊಡನೆ

ಸಂವಹನಕ್ಕಾಗಿ ವಿವಿಧ ಅಹಿಂಸಾತ್ಮಕ ವಿಧಾನಗಳನ್ನು ಅವರಿಗೆ ಕಲಿಸಬೇಕಾಗಿದೆ. ವಿದ್ಯಾರ್ಥಿ–ಶಿಕ್ಷಕರು (ಶಿಕ್ಷಕ ತರಬೇತಿ ಪಡೆಯುತ್ತಿರುವವರು) ಮಕ್ಕಳನ್ನು ಸಹಾನುಭೂತಿಯಿಂದ ಕೇಳಲು ಸಿದ್ಧರಾಗಬೇಕು.

ಸುಳ್ಳು ಸುದ್ದಿ ಮತ್ತು ತಪ್ಪು ಮಾಹಿತಿಯೊಂದಿಗೆ ವ್ಯವಹರಿಸುವುದು ಅಪಪ್ರಚಾರ, ತಪ್ಪು ಮಾಹಿತಿ ಮತ್ತು ನಕಲಿ ಸುದ್ದಿಗಳು ಹಾನಿಯನ್ನು ಉಂಟುಮಾಡಬಹುದು, ಇದು ಉದ್ದೇಶ–ಪೂರ್ವಕವೂ ಆಗಿರಬಹುದು ಅಥವಾ ಉದ್ದೇಶಪೂರ್ವಕ ಆಗಿರದೆಯೂ ಇರಬಹುದು. ಶಾಲೆಗಳಲ್ಲಿ, ಇದು ವಿದ್ಯಾರ್ಥಿಗಳ ಅಭಿಪ್ರಾಯವನ್ನು ಧ್ರುವೀಕರಿಸಬಹುದು ಮತ್ತು ಪ್ರಜಾಸತ್ತಾತ್ಮಕ ಕಾರ್ಯವಿಧಾನಗಳನ್ನು ದುರ್ಬಲಗೊಳಿಸಬಹುದು. ವಿವಿಧ ಡಿಜಿಟಲ್ ಮಾಧ್ಯಮದ ಮೂಲಕ ಲಿಂಕ್‌ಗಳು ಪಠ್ಯಗಳು, ವೀಡಿಯೊಗಳು ಅಥವಾ ಚಿತ್ರಗಳನ್ನು ಹಂಚಿಕೊಳ್ಳುವುದರಿಂದ ಆ ಮಾಹಿತಿ ವೈರಲ್ ಆಗುತ್ತದೆ. ಚಿಕ್ಕ ಮಕ್ಕಳು ತಪ್ಪು ಮಾಹಿತಿ ಮತ್ತು ನಕಲಿ ಸುದ್ದಿಗಳನ್ನು ಅತ್ಯಂತ ಬೇಗ ನಂಬುತ್ತಾರೆ. ಕೆಲವೊಮ್ಮೆ, ಶಿಕ್ಷಕರು, ಪ್ರಾಂಶುಪಾಲರು ಮತ್ತು ಅವರ ಗೆಳೆಯರ ಬಗ್ಗೆ ನಕಾರಾತ್ಮಕ ಚಿತ್ರಣವನ್ನು ನೀಡಲು ವಿದ್ಯಾರ್ಥಿಗಳು ಸಾಮಾಜಿಕ ಮಾಧ್ಯಮವನ್ನು ಬಳಸಿಕೊಳ್ಳುತ್ತಾರೆ. ಇದು ಅವರ ದೈಹಿಕ ಮತ್ತು ಮಾನಸಿಕ ಆರೋಗ್ಯದ ಮೇಲೆ ಹೆಚ್ಚಿನ ಒತ್ತಡವನ್ನು ಉಂಟುಮಾಡಬಹುದು. ಭವಿಷ್ಯದ ಶಿಕ್ಷಕರಿಗೆ (Prospective teachers) ಮಾಧ್ಯಮ ಮತ್ತು ಡಿಜಿಟಲ್ ಸಾಕ್ಷರತೆಯಲ್ಲಿ ತರಬೇತಿ ನೀಡಬೇಕು. ಇದು ಮಾಧ್ಯಮದ ವಿವಿಧ ಮೂಲಗಳಿಂದ ಬರುವ ಮಾಹಿತಿಯ ಸತ್ಯಾಸತ್ಯತೆಯನ್ನು ಅರ್ಥ ಮಾಡಿಕೊಳ್ಳುವುದು, ಮಾಹಿತಿಯನ್ನು ವಿಮರ್ಶಾತ್ಮಕವಾಗಿ ಮೌಲ್ಯಮಾಪನ ಮಾಡುವುದು, ವಾದಗಳನ್ನು ಮಂಡಿಸುವುದು, ಪುರಾವೆಗಳನ್ನು ಬಳಸುವುದು ಮತ್ತು ಸನ್ನಿವೇಶಕ್ಕೆ ಅನುಗುಣವಾಗಿ ವಿಶ್ಲೇಷಣೆಗಳನ್ನು ಮಾಡುವುದನ್ನು ಕಲಿಯಲು ಕಾರ್ಯತಂತ್ರಗಳನ್ನು ಅಭಿವೃದ್ಧಿಪಡಿಸುವುದನ್ನು ಒಳಗೊಂಡಿರುತ್ತದೆ. ಸೇವಾ ಪೂರ್ವ ಹಂತದಲ್ಲಿ ಶಿಕ್ಷಕರು ವಿವಿಧ ಕೌಶಲ್ಯಗಳನ್ನು ಕಲಿತುಕೊಂಡು ಅದನ್ನು ವಿವಿಧ ವಿಷಯಗಳ ಪಠ್ಯಕ್ರಮದಲ್ಲಿ ಸಂಯೋಜಿಸಬೇಕಾಗುತ್ತದೆ.

## ಸಂಘರ್ಷ ನಿರ್ವಹಣೆ

ಕಾಳಜಿಗೆ ಸಂಬಂಧಿಸಿದಂತೆ ಶಿಕ್ಷಕರು ಕೈಗೊಳ್ಳುವ ಕೆಲಸವು ಸಂಬಂಧದಲ್ಲಿ ಪರಸ್ಪರ ಸಹಕಾರ, ಸಾಮಾಜಿಕ ಮತ್ತು ಭಾವನಾತ್ಮಕ ಸಂಬಂಧಗಳಿಗೆ ಬದ್ಧತೆಯನ್ನು ಸೂಚಿಸುತ್ತದೆ–ಯಾದ್ದರಿಂದ, ಇದು ಈ ಸಂಬಂಧಿತ ಒತ್ತಡಗಳನ್ನೂ ತರಬಲ್ಲುದು. ಭವಿಷ್ಯದ ಶಿಕ್ಷಕರು ಸೂಕ್ಷ್ಮ ಮತ್ತು ಸಂಕೀರ್ಣ ನೈತಿಕ ಸಂದಿಗ್ಧತೆಗಳನ್ನು ಮತ್ತು ತರಗತಿಯಲ್ಲಿ ಅಥವಾ ಹೊರಗೆ ಸಂಘರ್ಷಗಳನ್ನು ಪರಿಹರಿಸಬೇಕಾಗಿದೆ. ಅವುಗಳನ್ನು ಸುಮ್ಮನೆ ಪಕ್ಕಕ್ಕೆ ಸರಿಸುವುದು ಮಕ್ಕಳ ಯೋಗಕ್ಷೇಮಕ್ಕೆ ಮತ್ತು ಅವರಿಗೂ ಸಮಸ್ಯಾತ್ಮಕವಾಗಿ ಪರಿಣಮಿಸಬಲ್ಲುದು. ವಿದ್ಯಾರ್ಥಿ–ಶಿಕ್ಷಕರಿಗೆ ತರಬೇತಿಯ ಸಂದರ್ಭದಲ್ಲಿ ಸಮಾನ ವಯಸ್ಕರ/ಗೆಳೆಯರ ನಡುವೆ ಮಧ್ಯಸ್ಥಿಕೆ, ಪುನಶ್ಚೈತನ್ಯಕಾರಿಯಾದ ನ್ಯಾಯ ತೀರ್ಮಾನ ಮತ್ತು ಸಂಘರ್ಷ ನಿರ್ವಹಣೆಯಂತಹ ವಿಧಾನಗಳನ್ನು ಕಲಿಸಬಹುದು.

ಸಂಘರ್ಷ ನಿರ್ವಹಣೆ ಕುರಿತ ಈ ರೀತಿಯ ತರಬೇತಿಗಳು ಭವಿಷ್ಯದ ಶಿಕ್ಷಕರಲ್ಲಿರುವ ಪಕ್ಷಪಾತಗಳು ಮತ್ತು ಪೂರ್ವಾಗ್ರಹಗಳನ್ನು ತಿದ್ದಿಕೊಳ್ಳಲು ಸಹಾಯ ಮಾಡುತ್ತದೆ ಮತ್ತು ಅವರ ತರಗತಿಗಳಲ್ಲಿ ಆತ್ಮವಿಶ್ವಾಸದಿಂದ ಸಂಘರ್ಷಗಳನ್ನು ನಿಭಾಯಿಸಲು ಧೈರ್ಯವನ್ನು ನೀಡುತ್ತದೆ. ಸಂಘರ್ಷಗಳನ್ನು ನಿರ್ವಹಿಸುವ ನಿಟ್ಟಿನಲ್ಲಿ ನೀಡಲಾಗುವ ಈ ರೀತಿಯ ತರಬೇತಿಗಳಲ್ಲಿ ಭಾಗವಹಿಸುವಿಕೆಯು ಶಿಕ್ಷಕ ವೃತ್ತಿಯ ಸ್ವರೂಪವನ್ನು ಅರಿತುಕೊಳ್ಳಲು ಮತ್ತು ಮಕ್ಕಳ ಯೋಗಕ್ಷೇಮವನ್ನು ಖಾತ್ರಿಪಡಿಸುವಲ್ಲಿ ಶಿಕ್ಷಕರಾಗಿ ಅವರ ಪಾತ್ರಗಳನ್ನು ಅರ್ಥ ಮಾಡಿಕೊಳ್ಳಲು ಅನುವು ಮಾಡಿಕೊಡುತ್ತದೆ. ಘರ್ಷಣೆಗಳು ಅವರ ದೈನಂದಿನ ವೈಯಕ್ತಿಕ ಜೀವನದಲ್ಲಿ ಮತ್ತು ಶಿಕ್ಷಕರಾಗಿ ಅವರ ವೃತ್ತಿಯ ಅವಿಭಾಜ್ಯ ಅಂಗವಾಗಿದೆ ಎಂಬುದನ್ನು ಅರ್ಥಮಾಡಿಕೊಳ್ಳಲು ಇದು ಅವರಿಗೆ ಸಹಾಯ ಮಾಡುತ್ತದೆ.

## ವಿವಾದಾತ್ಮಕ ಸಮಸ್ಯೆಗಳನ್ನು ಪರಿಹರಿಸುವುದು

ಶಾಲೆಗಳು ಸಮಾಜದ ಮಿನಿಯೇಚರ್(ಚಿಕ್ಕ ಮಾದರಿ) ಗಳಾಗಿವೆ ಮತ್ತು ಸಮಾಜವನ್ನು ಬಾಧಿಸುವ ಸವಾಲುಗಳು ಶಾಲೆಯ ಕಾರ್ಯ ಚಟುವಟಿಕೆಗಳಲ್ಲಿಯೂ ಹೆಚ್ಚಾಗಿ ಪ್ರತಿಫಲಿಸುತ್ತದೆ. ಮಕ್ಕಳು ತಮ್ಮ ಸುತ್ತ ನಡೆಯುವ ಅನ್ಯಾಯ ಮತ್ತು ಕೆಟ್ಟ ಘಟನೆಗಳಿಂದ ತೊಂದರೆ ಅನುಭವಿಸಬಹುದು. ವಿವಾದಾತ್ಮಕ ವಿಷಯಗಳು ಬಡತನ, ಭಯೋತ್ಪಾದನೆ, ಲಿಂಗ, ಜಾತಿ ಅಥವಾ ಅಸಮಾನತೆ ಮತ್ತು ಸಾಮಾಜಿಕ ನ್ಯಾಯಕ್ಕೆ ವ್ಯತಿರಿಕ್ತವಾಗಿರುವಂಥ ವಿವಾದಗಳಾಗಿರಬಹುದು ಅಥವಾ ಜೀವನದ ಇತರ ಯಾವುದೇ ಘಟನೆಗಳಾಗಿರಬಹುದು. ಈ ವಿಷಯಗಳು ಸಾಮಾನ್ಯವಾಗಿ ಸ್ವಭಾವದಲ್ಲಿ ಹೆಚ್ಚು ಸೂಕ್ಷ್ಮ ಮತ್ತು ಭಾವನಾತ್ಮಕವಾಗಿರುತ್ತವೆ ಮತ್ತು ಹೆಚ್ಚಿನ ಮಕ್ಕಳು (ಮತ್ತು ವಯಸ್ಕರು ಕೂಡ) ಈ ವಿಚಾರಗಳನ್ನು ತರ್ಕಬದ್ಧವಾಗಿ ಚರ್ಚಿಸುವಲ್ಲಿ ಸಾಕಷ್ಟು ಸವಾಲುಗಳನ್ನು/ಅಡೆತಡೆಗಳನ್ನು ಹೊಂದಿರುತ್ತಾರೆ. ಇವು ತರಗತಿಗಳಲ್ಲಿ ಪಾಠದ ಮಧ್ಯೆ ಚರ್ಚೆಗೆ ಬರಬಹುದು ಅಥವಾ ಕೆಲವೊಮ್ಮೆ ಶಿಕ್ಷಕರು ಸ್ವತಃ ತಾವೇ ತರಗತಿಯಲ್ಲಿ ಈ ವಿಷಯಗಳನ್ನು ಎತ್ತಿಕೊಂಡು ಚರ್ಚೆಯನ್ನು ಬೆಳೆಸಬೇಕಾಗಬಹುದು. ಆದ್ದರಿಂದ, ಸೇವಾಪೂರ್ವ ಶಿಕ್ಷಕರು / ತರಬೇತಿಯಲ್ಲಿರುವ ಶಿಕ್ಷಕರು ವಿವಾದಾತ್ಮಕ ಸಮಸ್ಯೆಗಳನ್ನು ನಿಭಾಯಿಸುವ ಬಗ್ಗೆ ತಿಳುವಳಿಕೆಯನ್ನು ಹೊಂದಿರಬೇಕು. ಈ ವಿಷಯಗಳ ಕುರಿತಂತೆ ಎಲ್ಲರೂ ಒಂದೆಡೆ ಸೇರಿ ನಡೆಸುವ ವಿಮರ್ಶೆ ಮತ್ತು ಮಾತುಕತೆಗಳು ಈ ಸಮಸ್ಯೆಗಳ ಕುರಿತಂತೆ ಬಹು ಆಯಾಮಗಳ ದೃಷ್ಟಿಕೋನಗಳನ್ನು ಅಭಿವೃದ್ಧಿಪಡಿಸಲು ಸಹಾಯ ಮಾಡುತ್ತದೆ ಮತ್ತು ಪ್ರಜಾಪ್ರಭುತ್ವದ ಮೌಲ್ಯಗಳಾದ ಇತರರ ನಂಬಿಕೆಗಳು ಮತ್ತು ದೃಷ್ಟಿಕೋನಗಳಿಗೆ ಬೆಲೆ

ಕೊಡುವುದು ಮತ್ತು ಅದರೆಡೆಗೆ ವಿಶಾಲ ಮನೋಭಾವ ಬೆಳೆಸಿಕೊಳ್ಳುವುದು, ವಿಮರ್ಶಾತ್ಮಕ ಚಿಂತನೆ, ಗೌರವಯುತವಾಗಿ ಮಾತನಾಡುವುದು ಮತ್ತು ಸಂದಿಗ್ಧತೆ ಮತ್ತು ಅನಿಶ್ಚಿತತೆಗಳಿಗೆ ಹೊಂದಿಕೊಳ್ಳುವುದು ಇತ್ಯಾದಿಗಳನ್ನು ಪೋಷಿಸಬಹುದು. ಇವುಗಳು ಸೇವಾಪೂರ್ವ ಶಿಕ್ಷಕರು ಪರಸ್ಪರರ ಅಭಿಪ್ರಾಯಗಳನ್ನು ಹಂಚಿಕೊಳ್ಳಲು ಮತ್ತು ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ನಿಭಾಯಿಸಲು ಸಹಾಯ ಮಾಡುತ್ತವೆ.

ಸಾಮಾಜಿಕ ನ್ಯಾಯ ಮತ್ತು ಕಾಳಜಿಯ ದೃಷ್ಟಿಕೋನಗಳ ಮೂಲಕ ಅವರ ಶೈಕ್ಷಣಿಕ ಪಾಠಗಳನ್ನು ಪರಿಶೀಲಿಸುವುದು, ವಿದ್ಯಾರ್ಥಿ–ಶಿಕ್ಷಕರಿಗೆ ಸಮಾಜದ ವಾಸ್ತವಗಳು ಚಲನಶೀಲವಾಗಿರುವಂಥದ್ದು ಮತ್ತು ದಿನನಿತ್ಯ ಇವುಗಳ ಬಗ್ಗೆ ವಿಮರ್ಶಾತ್ಮಕವಾಗಿ ತಿಳಿದುಕೊಳ್ಳುವ ಅಗತ್ಯವಿದೆ ಎಂದು ಅರ್ಥ ಮಾಡಿಕೊಳ್ಳಲು ಸಹಾಯ ಮಾಡುತ್ತದೆ. ಮೇಲೆ ತಿಳಿಸಿದ ಸಂಘರ್ಷ ನಿರ್ವಹಣೆಯ ವಿಧಾನಗಳ ಜೊತೆಗೆ, ವಿವಾದಾತ್ಮಕ ವಿಷಯಗಳನ್ನು ಅರ್ಥ ಮಾಡಿಸಲು ಭವಿಷ್ಯದ ವಿದ್ಯಾರ್ಥಿಗಳಿಗೆ 'ಶೈಕ್ಷಣಿಕ ವಿವಾದ'ದಂತಹ ('academic controversy') ಸಹ ಕಲಿಕಾ ವಿಧಾನಗಳನ್ನು ಸಹ ಪರಿಚಯಿಸಬಹುದು. ಈ ರೀತಿಯ ತರಬೇತಿಯು ದುರ್ಬಲ ಹಿನ್ನೆಲೆಯಿಂದ ಬಂದ ವಿದ್ಯಾರ್ಥಿಗಳನ್ನು ರಕ್ಷಿಸಲು ಮತ್ತು ಅನಿರೀಕ್ಷಿತ ಟೀಕೆಗಳನ್ನು ಮತ್ತು ಪ್ರಶ್ನೆಗಳನ್ನು ರಚನಾತ್ಮಕ ರೀತಿಯಲ್ಲಿ ಎದುರಿಸಲು ಅವರನ್ನು ಸಿದ್ಧಪಡಿಸುತ್ತದೆ.

## ಮಕ್ಕಳನ್ನು ಕೇಳುವುದು

ಶಾಲಾ ಜೀವನದಲ್ಲಿ ಮಕ್ಕಳು ತಮ್ಮನ್ನು ಹೇಗೆ ಗ್ರಹಿಸಿಕೊಳ್ಳುತ್ತಾರೆ ಎಂಬುದಕ್ಕೆ ಅವರ ಶಿಕ್ಷಣಕ್ಕೆ ಸಂಬಂಧಿಸಿದ ಅಂಶಗಳಾದ – ಪಠ್ಯಕ್ರಮ, ಮಕ್ಕಳ–ಶಿಕ್ಷಕರ ಸಂಬಂಧ, ಶಿಕ್ಷಣ ಅಭ್ಯಾಸಗಳು, ಪಠ್ಯಕ್ರಮ ಮತ್ತು ಕ್ರೀಡಾ ಚಟುವಟಿಕೆಗಳು, ಆಟದ ಮೈದಾನ, ಮೂಲಸೌಕರ್ಯ, ಗೆಳೆಯರ ಸಂಬಂಧಗಳು ಇವುಗಳು ಒಳನೋಟಗಳನ್ನು ಒದಗಿಸುತ್ತವೆ. ಮಕ್ಕಳ ದೃಷ್ಟಿಕೋನಗಳನ್ನು ಆಲಿಸುವುದು ಶಾಲೆಗಳಿಗೆ ಪ್ರಮುಖ, ಕಾಳಜಿಯುಳ್ಳ ಕಾರ್ಯಸೂಚಿಯಾಗಿರಬೇಕು, ಅದು ಒಳಗೊಳ್ಳುವಿಕೆಯನ್ನು ಪ್ರತಿನಿಧಿಸುತ್ತದೆ. ವಿದ್ಯಾರ್ಥಿ–ಶಿಕ್ಷಕರಿಗೆ, ಕಲಿಕೆಯ ಪ್ರಕ್ರಿಯೆಗಳಲ್ಲಿ ಮಕ್ಕಳೊಡನೆ ಸಮಾಲೋಚನೆ ಹಾಗು ಒಳಗೊಳ್ಳುವಿಕೆಯ ಶಿಕ್ಷಣ, ಶಾಲೆಯ ಬಗ್ಗೆ ನಿರ್ಧಾರ ತೆಗೆದುಕೊಳ್ಳುವಿಕೆ ಹಾಗು ತರಗತಿಯ ಚಟುವಟಿಕೆಗಳು, ವಿದ್ಯಾರ್ಥಿಗಳು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಲು ಅವರನ್ನು ಪ್ರೋತ್ಸಾಹಿಸುವುದು ಮತ್ತು ಮಕ್ಕಳ ಜೀವನವನ್ನು ಪ್ರಭಾವಿಸಬಲ್ಲ ಪಾಠ–ಪ್ರವಚನಗಳಲ್ಲಿ ಮಕ್ಕಳ ಭಾಗವಹಿಸುವಿಕೆಯನ್ನು ಸುಲಭಗೊಳಿಸುವ ವಿಧಾನ ಮುಂತಾದವುಗಳನ್ನು ಅರ್ಥ ಮಾಡಿಸುವಲ್ಲಿ ಪೂರ್ವ–ಸೇವಾ ಶಿಕ್ಷಕರ (ಭವಿಷ್ಯದ ಶಿಕ್ಷಕರ) ಕಾರ್ಯಕ್ರಮಗಳು ಪ್ರಮುಖ ಪಾತ್ರ ವಹಿಸುತ್ತವೆ.

ನಮ್ಮ ಸಂವಿಧಾನ ಮತ್ತು ಇತರೆ ಮಕ್ಕಳ ಹಕ್ಕುಗಳ ಕುರಿತ ತಿಳುವಳಿಕೆಯನ್ನು ಅಭಿವೃದ್ಧಿಪಡಿಸುವುದು

ಭಾರತದ ಸಂವಿಧಾನವು ನಾಗರಿಕರ ಹಕ್ಕುಗಳನ್ನು ರಕ್ಷಿಸುವ ವಿಶಾಲ ರಚನೆಯನ್ನು ಪ್ರತಿನಿಧಿಸುತ್ತದೆ ಮತ್ತು ಭಾರತದ ಒಟ್ಟಾರೆ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಭಿವೃದ್ಧಿಗೆ ರೂಪುರೇಷೆಗಳನ್ನು ಒದಗಿಸುತ್ತದೆ. ಶಾಲಾ ಪಠ್ಯಗಳು ಸಂವಿಧಾನದಲ್ಲಿ ಪ್ರತಿಪಾದಿಸಿರುವ ಸಮಾನತೆ, ಸಮತೆ, ಜಾತ್ಯತೀತತೆ, ನ್ಯಾಯ, ಸ್ವಾತಂತ್ರ್ಯ ಮತ್ತು ಭ್ರಾತೃತ್ವದ ಮೂಲಭೂತ ಮೌಲ್ಯಗಳನ್ನು ಪ್ರತಿಬಿಂಬಿಸಬೇಕು ಹಾಗೂ ಮಕ್ಕಳು ಮತ್ತು ಶಿಕ್ಷಕರು ತಮ್ಮ ವೈಯಕ್ತಿಕ ಮತ್ತು ಸಾಮಾಜಿಕ ಜೀವನದಲ್ಲಿ ಈ ಮೌಲ್ಯಗಳನ್ನು ಅನುಕರಿಸಲು ಪ್ರೋತ್ಸಾಹಿಸಬೇಕು. ಸಾಂವಿಧಾನಿಕ ಮೌಲ್ಯಗಳು, ಮೂಲಭೂತ ಕರ್ತವ್ಯಗಳು ಮತ್ತು ಮಕ್ಕಳ ಹಕ್ಕುಗಳ ಜ್ಞಾನ ಮತ್ತು ವಿಮರ್ಶಾತ್ಮಕ ತಿಳುವಳಿಕೆಯನ್ನು ಪಠ್ಯಕ್ರಮ ಮತ್ತು ಬೋಧನಾ ಕ್ರಮದ ಮೂಲಕ ತಿಳಿಸುವ ಅಗತ್ಯವಿದೆ. ಸೇವಾ–ಪೂರ್ವ ಶಿಕ್ಷಕರಿಗೆ ಸಂವಿಧಾನ, ಅದರ ಮೌಲ್ಯಗಳು ಮತ್ತು ಅವರ ತರಗತಿಯಲ್ಲಿ ಅದನ್ನು ಕಲಿಸುವ ವಿಧಾನಗಳ ಬಗ್ಗೆ ಶಿಕ್ಷಣ ನೀಡಬೇಕು. ಸಂವಿಧಾನ ಮತ್ತು ಇತರೆ ಮಕ್ಕಳ ಹಕ್ಕುಗಳ ಕುರಿತ ಜ್ಞಾನವನ್ನು ಹೊಂದಿರುವುದು ಶಿಕ್ಷಕರಿಗೆ ಸಂವಿಧಾನದ ಅಡಿಯಲ್ಲಿ ಸಂಘರ್ಷಗಳು ಮತ್ತು ವಿವಾದಾತ್ಮಕ ವಿಷಯಗಳನ್ನು ನಿಭಾಯಿಸಲು ಸಹಾಯ ಮಾಡುತ್ತದೆ. ಮಕ್ಕಳ ಯೋಗಕ್ಷೇಮವನ್ನು ಖಾತರಿಪಡಿಸುವಲ್ಲಿ, ಮಕ್ಕಳ ಘನತೆ ಮತ್ತು ಗೌರವದ ರಕ್ಷಣೆಯ ವಿಷಯದಲ್ಲಿ ಯಾವುದೇ ರೀತಿಯ ರಾಜಿ ಇಲ್ಲ ಎಂಬುದನ್ನು ಸೇವಾಪೂರ್ವ ಶಿಕ್ಷಕರಿಗೆ ಅರ್ಥಮಾಡಿಕೊಳ್ಳಲು ಸಂವಿಧಾನ ಶಿಕ್ಷಣವು ಸಹಾಯ ಮಾಡುತ್ತದೆ.

## ಸ್ವ-ಅಭಿವೃದ್ಧಿಗೆ ಅವಕಾಶಗಳು

ಶಿಕ್ಷಕರ ಯೋಗಕ್ಷೇಮವು, ಮಕ್ಕಳ ಯೋಗಕ್ಷೇಮ ರಕ್ಷಣೆಗೆ ಮತ್ತು ಕಾಳಜಿಯುಳ್ಳ ಸಮುದಾಯಗಳಾಗಿ ಶಾಲೆಗಳನ್ನು ರಚಿಸುವಲ್ಲಿ ನಿರ್ಣಾಯಕವಾಗಿದೆ. ಬೋಧನೆಯಂತಹ ಕಾಳಜಿ ನೀಡುವ ವೃತ್ತಿಗಳು ಭಾವನಾತ್ಮಕವಾಗಿ ದಣಿವು ನೀಡಬಹುದು. ನಿರಂತರವಾಗಿ ಬೋಧನೆಗೆ ಹೆಚ್ಚಿನ ಪ್ರೇರಣೆ, ಬದ್ಧತೆ ಮತ್ತು ಸ್ವಾತಂತ್ರದ ಅಗತ್ಯವಿದೆ. ಶಿಕ್ಷಕರ ಶಿಕ್ಷಣ ಕಾರ್ಯಕ್ರಮಗಳು ವಿದ್ಯಾರ್ಥಿ–ಶಿಕ್ಷಕರನ್ನು, ಮಕ್ಕಳ ಸಾಮಾಜಿಕ–ಭಾವನಾತ್ಮಕ ಅಗತ್ಯಗಳ ಬಗ್ಗೆ ಜ್ಞಾನವನ್ನು ವೃದ್ಧಿಸುವುದು ಮಾತ್ರವಲ್ಲದೆ, ಶಿಕ್ಷಕರ ಸಾಮಾಜಿಕ ಮತ್ತು ಭಾವನಾತ್ಮಕ ಸಾಮರ್ಥ್ಯಗಳನ್ನು ಅಭಿವೃದ್ಧಿಪಡಿಸುವ ತಂತ್ರಗಳನ್ನು ಸಹ ಸಜ್ಜುಗೊಳಿಸ–ಬೇಕಾಗುತ್ತದೆ. ಕಲೆ, ಸಂಗೀತ, ನೃತ್ಯ ಮತ್ತು ರಂಗಭೂಮಿಯ

ಅನುಭವವು ವಯಸ್ಕ ವಿದ್ಯಾರ್ಥಿಗಳಲ್ಲಿ ತಮ್ಮನ್ನು ತಾವು ಅರ್ಥಮಾಡಿಕೊಳ್ಳಲು ಅವಕಾಶಗಳನ್ನು ಸೃಷ್ಟಿಸುತ್ತದೆ, ವಯಸ್ಕ ವಿದ್ಯಾರ್ಥಿಗಳಲ್ಲಿ ಸಂಬಂಧಗಳನ್ನು ಬಿಗಿಯಾಗಿಸುತ್ತದೆ ಮತ್ತು ಅವರ ದೈಹಿಕ ಮತ್ತು ಮಾನಸಿಕ ಆರೋಗ್ಯವನ್ನು ಹೆಚ್ಚಿಸುತ್ತದೆ. ಉದಾಹರಣೆಗೆ, ಸಾಂಕ್ರಾಮಿಕ ಸಮಯದಲ್ಲಿ ಆನ್ಲೈನ್ ತರಗತಿಗಳಲ್ಲಿ, ವಿಶ್ವವಿದ್ಯಾನಿಲಯದಲ್ಲಿ 'ಶಿಕ್ಷಕರು ಮತ್ತು ಬೋಧನೆ' ('Teachers and Teaching') ಎಂಬ ನನ್ನ ಕೋರ್ಸ್ ತೆಗೆದುಕೊಂಡ ವಿದ್ಯಾರ್ಥಿಗಳು (ಎಂಎ ಶಿಕ್ಷಣ) ತೊಂಬತ್ತು ನಿಮಿಷಗಳ ತರಗತಿಯ ಮೊದಲ ಹದಿನೈದು ನಿಮಿಷಗಳಲ್ಲಿ ತಮ್ಮಲ್ಲಿರುವ ವಿವಿಧ ಕಲೆಯನ್ನು ಹಂಚಿಕೊಂಡರು. ಕೆಲವರು ಸಂಗೀತದ ತುಣುಕನ್ನು ಹಾಡಿದರು, ವಾದ್ಯವನ್ನು ನುಡಿಸಿದರು, ಹೆಣಿಗೆ, ಚಿತ್ರಕಲೆ, ಯೋಗ, ಅಥವಾ ಮಂಡಲ ಕಲೆಗಳನ್ನು, ಕಲಿಸಿದರು. ಈ ಸಂಕ್ಷಿಪ್ತ ಅವಧಿಯಲ್ಲಿ ಹೆಚ್ಚಿನ ವಿದ್ಯಾರ್ಥಿಗಳು ತಮ್ಮ ವೀಡಿಯೊಗಳನ್ನು ಆನ್ ಮಾಡಿಕೊಂಡಿದ್ದರು.

ಈ ಅನುಭವದ ಕುರಿತು ಪ್ರತಿಕ್ರಿಯಿಸಿದವರಲ್ಲಿ ಹೆಚ್ಚಿನವರು ಈ ಅನುಭವಗಳು ಹೆಚ್ಚಿನ ಸಂತೋಷವನ್ನು ಒದಗಿಸಿದವು ಎಂದಿದ್ದಾರೆ. ತಮ್ಮ ಗೆಳೆಯರ ನಡುವೆ ಭಾವನಾತ್ಮಕ ಸಂಪರ್ಕವನ್ನು ಬಲಪಡಿಸಿದವು ಮತ್ತು ಶೈಕ್ಷಣಿಕ ಕಲಿಕೆಯನ್ನು ಮೀರಿ ತಮ್ಮ ಸ್ನೇಹಿತರೊಂದಿಗೆ ಸಂಪರ್ಕ ಸಾಧಿಸಲು ಅವಕಾಶಗಳನ್ನು ಸೃಷ್ಟಿಸಿತು ಎಂದು ಅಭಿಪ್ರಾಯಪಟ್ಟರು. ಈ ಅನುಭವದಿಂದ ಹೊರಬಂದು, ನಾನು ಆಫ್ಲೈನ್ ವಿಧಾನದಲ್ಲಿ ಕಲಿಸುವಾಗಲೂ ಈ ಪ್ರಯತ್ನವನ್ನು ಮುಂದುವರೆಸಿದೆ ಮತ್ತು ಆಗಲೂ ವಿದ್ಯಾರ್ಥಿಗಳು ಇದೇ ರೀತಿಯ ಯೋಚನೆಗಳು ಮತ್ತು ಭಾವನೆಗಳನ್ನು ವ್ಯಕ್ತಪಡಿಸಿದರು. ಯಾವುದೇ ಮೂರ್ತ ರೂಪದ ಸೂತ್ರೀಕರಣಗಳನ್ನು ಮಾಡಲು ಪ್ರಕ್ರಿಯೆ ಮತ್ತು ಫಲಿತಾಂಶಗಳ ಆಳವಾದ ಪರಿಶೀಲನೆಯ ಅಗತ್ಯವಿರುವಾಗ, ವಯಸ್ಕ ವಿದ್ಯಾರ್ಥಿಗಳ ದೃಷ್ಟಿಕೋನಗಳು ಈ ಪ್ರಯೋಗದೆಡೆಗಿನ ಸ್ವಯಂ-ಅಭಿವೃದ್ಧಿ ಮತ್ತು ಜಾಗೃತಿಯ ಮಾರ್ಗಗಳ ಕಡೆಗೆ ಧನಾತ್ಮಕ ಪ್ರವೃತ್ತಿಯನ್ನು ಸೂಚಿಸುತ್ತವೆ.

## ಅಂತಿಮ ಅವಲೋಕನಗಳು

ಬೋಧನೆಯು ಮಕ್ಕಳ ಸಾಮಾಜಿಕ ಭಾವನಾತ್ಮಕ ಹಾಗೂ ಸಾಂಸ್ಕೃತಿಕ ಪ್ರಪಂಚದಲ್ಲಿ ಮತ್ತು ವಿಶಾಲವಾದ ಸಾಮಾಜಿಕ-ರಾಜಕೀಯ, ಐತಿಹಾಸಿಕ ಮತ್ತು ಆರ್ಥಿಕ ನೆಲೆಗಳಲ್ಲಿ ಸಂಭವಿಸುತ್ತದೆ. ಮಕ್ಕಳಲ್ಲಿರುವ ಈ ಎರಡೂ ಲೋಕಗಳ ತಿಳುವಳಿಕೆಯನ್ನು ಪಡೆಯುವುದು ಬೋಧನಾ ಕಾರ್ಯವನ್ನು ಕೈಗೊಳ್ಳಲು ಅತ್ಯಗತ್ಯ. ಕಲಿಸಲು ಕಲಿಯುವುದು ಒಂದು ಸಂಕೀರ್ಣ ವಿದ್ಯಮಾನವಾಗಿದೆ. ಶಿಕ್ಷಕರಾಗುವುದು ಮಕ್ಕಳ ಕಲಿಕೆ ಮತ್ತು ತಿಳುವಳಿಕೆ ವಿಧಾನಗಳಿಗೆ ಹೊಂದಿಕೊಳ್ಳುವುದು ಮತ್ತು ಮಕ್ಕಳ ಸಾಮಾಜಿಕ-ಭಾವನಾತ್ಮಕ ಜೀವನದ ಕುರಿತು ಸಹಾನುಭೂತಿ ಹೊಂದುವ ಸಾಮರ್ಥ್ಯವನ್ನು ಒಳಗೊಂಡಿರುತ್ತದೆ. ವಿದ್ಯಾರ್ಥಿ ಶಿಕ್ಷಕರು ಮಕ್ಕಳ ಸಾಮಾಜಿಕ ಹಿನ್ನೆಲೆಯ ಬಗ್ಗೆ ಕಾಳಜಿ, ಗೌರವ, ಸಹಾನುಭೂತಿ, ಅಕ್ಕರೆ ಮತ್ತು ಸಂವೇದನಾಶೀಲತೆಯ ಗುಣಗಳನ್ನು ವೃತ್ತಿಪರ ಅಗತ್ಯವಾಗಿ ಬೆಳೆಸಿಕೊಳ್ಳಬೇಕು. ಓದುವುದು ಮತ್ತು ಬರೆಯುವುದು, ಪ್ರಶ್ನಿಸುವುದು, ಬೋಧನೆ, ಸಂಭಾಷಣೆ, ಸಹಭಾಗಿತ್ವದಲ್ಲಿ ವಿಚಾರಣೆ, ಸ್ವಯಂ-ಅಭಿವೃದ್ಧಿ, ಚಿಂತನೆ, ಆತ್ಮಾವಲೋಕನ ಮತ್ತು ಸೃಜನಶೀಲ ಅಭಿವ್ಯಕ್ತಿ ಮುಂತಾದವುಗಳನ್ನು ಒಳಗೊಂಡಿರುವ ಅನುಭವಗಳ ವ್ಯಾಪಕ ಶ್ರೇಣಿಯು ಶಾಲೆಯೆಡೆಗೆ ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಸಾಮಾಜಿಕ-ಭಾವನಾತ್ಮಕ ಮತ್ತು ನೈತಿಕ ಭಾವನೆಗಳನ್ನು ಬೆಳೆಸಿಕೊಳ್ಳಲು ಮುಖ್ಯವಾಗಿದೆ. ಈ ಅನುಭವಗಳು ಶಿಕ್ಷಕರನ್ನು ಯಶಸ್ಸಿನೆಡೆಗೆ ಕೊಂಡೊಯ್ದರೆ ಮತ್ತು ಅವರು ಈ ಶೈಕ್ಷಣಿಕ ಗುರಿಗಳನ್ನು ಶ್ಲಾಘಿಸಲು 'ಪ್ರಾರಂಭಿಸಿದರೆ', ಅದು ಅವರು ಸೇರುವ ಶಾಲಾ ಸಮುದಾಯಗಳಲ್ಲಿ ನಿರ್ಣಾಯಕ ಪಾತ್ರ ವಹಿಸಲು ಅವರಿಗೆ ಸಹಾಯ ಮಾಡುತ್ತದೆ. ಜೊತೆಗೆ ಇದು ಸ್ವಯಂ-ಪರಿವರ್ತನೆ, ಜೀವಮಾನದ ಅನ್ವೇಷಣೆ ಮತ್ತು ಕಲಿಕೆಯ ಸಾಧ್ಯತೆಗಳ ಕಡೆಗೆ ಪಯಣಕ್ಕೆ ಉತ್ತಮ ಆರಂಭವಾಗುತ್ತದೆ.



**ರಾಜಶ್ರೀ ಶ್ರೀನಿವಾಸನ್,** ಅವರು ಬೆಂಗಳೂರಿನ ಅಜೀಂ ಪ್ರೇಮ್‌ಜಿ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಎಜುಕೇಶನ್‌ನಲ್ಲಿ ಪ್ರೊಫೆಸರ್ ಆಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಶಿಕ್ಷಕರ ಶಿಕ್ಷಣ ಕುರಿತಂತೆ ಮಕ್ಕಳ ಅಭಿವೃದ್ಧಿ ಮತ್ತು ಬೋಧನಾ ಅಭ್ಯಾಸಗಳು ಎಂಬ ವಿಷಯದಲ್ಲಿ ಆಸಕ್ತಿ ಹೊಂದಿದ್ದಾರೆ. ಇವರನ್ನು rajashree@apu.edu.in ಮೂಲಕ ಸಂಪರ್ಕಿಸಬಹುದು.

ಅನುವಾದ: **ಶ್ರೀನಿಧಿ ಅಡಿಗ** | ಪರಿಶೀಲನೆ: **ಲತಾ ಕೆ.ಸಿ.**

ತರಗತಿಯಲ್ಲಿ ಭಾವನೆಗಳ ಬಗ್ಗೆ ಮಾತನಾಡುವುದು ಮತ್ತು ಅಭಿವ್ಯಕ್ತಿಗೆ ಅವಕಾಶವನ್ನು ಒದಗಿಸುವುದು ಅಗತ್ಯ. ಮಕ್ಕಳು ಹೊಸದೊಂದು ಅನುಭವವನ್ನು ಅನುಭವಿಸಿದಾಗ, ಅವರು ಅದನ್ನು ಹಂಚಿಕೊಳ್ಳಲು ಬಯಸುತ್ತಾರೆ. ಆದರೆ ಅವರಿಗೆ ಅದನ್ನು ವ್ಯಕ್ತಪಡಿಸಲು ಸಾಮಾನ್ಯವಾಗಿ ಅವಕಾಶವಾಗಲೀ, ಪ್ರೋತ್ಸಾಹವಾಗಲೀ ಸಿಗುವುದಿಲ್ಲ. ಅಂತಹ ಭಾವನೆಗಳನ್ನು ವ್ಯಕ್ತಪಡಿಸಲು ಅವಕಾಶ ನೀಡದೆ ಹಾಗೆಯೇ ಬಿಟ್ಟರೆ, ಬೆದರಿಸುವಂತಹ ನಕಾರಾತ್ಮಕ ಸಾಮಾಜಿಕ ನಡವಳಿಕೆಗಳಿಗೆ ಕಾರಣವಾಗುತ್ತದೆ. ಸೃಜನಾತ್ಮಕ ಕಲಾ ಪ್ರಕಾರಗಳು ವಿನೋದಾತ್ಮಕವಾಗಿದ್ದು, ವಿದ್ಯಾರ್ಥಿಗಳು ತಮ್ಮನ್ನು ತಾವು ತೊಡಗಿಸಿಕೊಳ್ಳಲು ಮತ್ತು ನಂಬಿಕೆಯನ್ನು ಗಳಿಸಲು ಜಾಗವನ್ನು ಸೃಷ್ಟಿಸುತ್ತವೆ.

ಮಹಿಮಾ ರಸ್ತೋಗಿ, ಅಭಿವ್ಯಕ್ತಿಶೀಲ ಕಲಾ ಪ್ರಕಾರಗಳು ಶಿಕ್ಷಕರಿಗಾಗಿ ಪರಿಕರಗಳು, ಪು 37